### ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 674 |
| ಸದಸ್ಯರ ಹೆಸರು | : | ಶ್ರೀ ನಿರಾಣಿ ಹಣಮಂತ್ ರುದ್ರಪ್ಪ (ಪದವೀಧರರ ಕ್ಷೇತ್ರ) |
| ಉತ್ತರಿಸುವ ದಿನಾಂಕ | : | 25-09-2020. |
| ಉತ್ತರಿಸುವವರು | : | ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ಹೊಸದಾಗಿ ಗ್ರಾಮ ಪಂಚಾಯಿತಿಗಳನ್ನು ರಚಿಸುವಾಗ ಅನುಸರಿಸುವ ನಿಯಮಗಳೇನು; | ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ಅಧಿನಿಯಮ, 1993 ಪ್ರಕರಣ 4 ರಲ್ಲಿ ಸರ್ಕಾರದ ಸಾಮಾನ್ಯ ಅಥವಾ ವಿಶೇಷ ಆದೇಶಗಳಿಗೊಳಪಟ್ಟು ಜಿಲ್ಲಾಧಿಕಾರಿಗಳು 5000 ಕ್ಕಿಂತ ಕಡಿಮೆ ಇಲ್ಲದ ಮತ್ತು 7000 ಕ್ಕೆ ಹೆಚ್ಚಿಗೆ ಇಲ್ಲದ ಜನಸಂಖ್ಯೆಯುಳ್ಳ ಒಂದು ಗ್ರಾಮವನ್ನು ಅಥವಾ ಗ್ರಾಮಗಳ ಗುಂಪನ್ನು ಒಳಗೊಂಡಿರುವ ಯಾವುದೇ ಪ್ರದೇಶವನ್ನು ಪಂಚಾಯತಿ ಪ್ರದೇಶವೆಂದು ಘೋಷಿಸುವುದು ಯುಕ್ತವೆಂದು ಅಭಿಪ್ರಾಯಪಟ್ಟರೆ, ಮೊದಲೆ ಪ್ರಕಟಣೆ ಹೊರಡಿಸಿದ ತರುವಾಯ ಅಂತಹ ಪ್ರದೇಶವನ್ನು ಪಂಚಾಯತಿ ಪ್ರದೇಶವೆಂದು ಘೋಷಿಸಬಹುದು ಮತ್ತು ಅದರ ಕೇಂದ್ರ ಕಾರ್ಯ ಸ್ಥಾನವನ್ನು ನಿರ್ದಿಷ್ಟಪಡಿಸಬಹುದಾಗಿದೆ. |
| (ಆ) | ಗ್ರಾಮ ಪಂಚಾಯಿತಿಗಳ ಪುನರ್ ವಿಂಗಡನೆ ಸಂದರ್ಭದಲ್ಲಿ ರಾಜ್ಯಾದ್ಯಂತ ಎಷ್ಟು ಹೊಸ ಗ್ರಾಮ ಪಂಚಾಯಿತಿಗಳನ್ನು ರಚಿಸಲಾಗಿದೆ; | ಗ್ರಾಮ ಪಂಚಾಯಿತಿಗಳ ಪುನರ್ ವಿಂಗಡನೆ ಸಂದರ್ಭದಲ್ಲಿ ರಾಜ್ಯಾದ್ಯಂತ 461 ಹೊಸ ಗ್ರಾಮ ಪಂಚಾಯಿತಿಗಳನ್ನು ರಚಿಸಲಾಗಿದೆ; |
| (ಇ) | ಬೀಳಗಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಬಾಗಲಕೋಟೆ ಜಿಲ್ಲೆಯ "ರೊಳ್ಳಿ" ಗ್ರಾಮದಲ್ಲಿ ಹೊಸ ಗ್ರಾಮ ಪಂಚಾಯಿತಿಯನ್ನು ರಚಿಸಬೇಕೆನ್ನುವ ಬೇಡಿಕೆಯು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| (ಈ) | ಹಾಗಿದ್ದಲ್ಲಿ, ಸದರಿ "ರೊಳ್ಳಿ" ಗ್ರಾಮದಲ್ಲಿ ಇಲ್ಲಿಯವರೆಗೂ ಹೊಸ ಗ್ರಾಮ ಪಂಚಾಯಿತಿಯನ್ನು ರಚಿಸದೇ ಇರುವುದಕ್ಕೆ ಕಾರಣಗಳೇನು; ಹಾಗೂ ಗ್ರಾಮದ ಜನರು ಗ್ರಾಮ ಪಂಚಾಯಿತಿಯನ್ನು ಬಹಿಷ್ಕರಿಸಿರುವುದನ್ನು ಸರ್ಕಾರ ಗಮನಿಸಿದೆಯೇ; | ರಾಜ್ಯದಲ್ಲಿ ಹಾಲಿ ಇರುವ ಕೆಲವು ಗ್ರಾಮ ಪಂಚಾಯತಿಗಳನ್ನು ವಿಭಜಿಸಿ ಹೊಸ ಗ್ರಾಮ ಪಂಚಾಯತಿಗಳನ್ನು ರಚಿಸಲು ಆರ್ಥಿಕ ಇಲಾಖೆಗೆ ಪ್ರಸ್ತಾವನೆ ಸಲ್ಲಿಸಲಾಗಿತ್ತು. ಆರ್ಥಿಕ ಇಲಾಖೆಯು ದಿನಾಂಕ:15-04-2020 ರಂದು ಸಂಖ್ಯೆ: ಆಇ 107 ವೆಚ್ಚ 6/2020 (ಇ-ಆಫೀಸ್) ರಲ್ಲಿ ನೀಡಿರುವ ಅಭಿಪ್ರಾಯದಲ್ಲಿ ಶೀಘ್ರದಲ್ಲಿ ಜನಗಣತಿ ಕಾರ್ಯ ಮತ್ತು ಸ್ಥಳೀಯ ಸಂಸ್ಥೆಗಳ ಚುನಾವಣೆ ನಡೆಯಲಿದ್ದು, ಇಂತಹ ವೇಳೆಯಲ್ಲಿ ಹೊಸದಾಗಿ ಗ್ರಾಮ ಪಂಚಾಯತಿಗಳನ್ನು ಸೃಜಿಸುವುದಕ್ಕೆ ಅವಕಾಶವಿರುವುದಿಲ್ಲ. ಜನಗಣತಿ ಮತ್ತು ಚುನಾವಣೆ ಪ್ರಕ್ರಿಯೆಗಳು ಪೂರ್ಣಗೊಂಡ ನಂತರ ಇಂತಹ ಪ್ರಸ್ತಾವನೆಗಳನ್ನು ಸಲ್ಲಿಸುವಂತೆ ತಿಳಿಸಿದೆ.<br>ರೊಳ್ಳಿ ಗ್ರಾಮದ ಜನರು ಗ್ರಾಮ ಪಂಚಾಯಿತಿ ಚುನಾವಣೆಯನ್ನು ಬಹಿಷ್ಕರಿಸಿರುವುದನ್ನು ಸರ್ಕಾರ ಗಮನಿಸಿದೆ. |

| | | |
|---|---|---|
| (ಉ) | ಯಾವ ಕಾಲಮಿತಿಯಲ್ಲಿ ಸದರಿ "ರೊಳ್ಳಿ" ಗ್ರಾಮಕ್ಕೆ ಹೊಸ ಗ್ರಾಮ ಪಂಚಾಯಿತಿಯನ್ನು ರಚಿಸಲಾಗುವುದು? | ಕಾಲಮಿತಿ ಇರುವುದಿಲ್ಲ. |

ಸಂ. ಗ್ರಾಅಪ 736 ಗ್ರಾಪಂಅ 2020

**(ಕೆ.ಎಸ್. ಈಶ್ವರಪ್ಪ)**
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.